ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಖಾಸಗಿ ಶಿಕ್ಷಣ ಸಂಸ್ಥೆಗಳ ಅಧಿಕ ಶುಲ್ಕಗಳ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) :-

1025 (1069) ಮಾನ್ಯ ಪ್ರಾಥಮಿಕ ಮತ್ತು ಪೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿರುವ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರವು ಯಾವ ಯಾವ ರಿಯಾಯಿತಿ ಸೌಲಭ್ಯಗಳನ್ನು ನೀಡುತ್ತಿದೆ ;

(ಆ) ಆಂಗ್ಲ ಮಾಧ್ಯಮದ ಶಿಕ್ಷಣ ಸಂಸ್ಥೆಗಳು ಲಕ್ಷ ಲಕ್ಷಗಳ ಶುಲ್ಕಗಳನ್ನು ಮಕ್ಕಳಿಂದ ಸಂಗ್ರಹಿಸುತ್ತಿದ್ದು, ಈ ಆದಾಯಕ್ಕೆ ಯಾವ ರೀತಿಯ ತೆರಿಗೆಯನ್ನು ಸರ್ಕಾರ ನಿಗದಿ ಪಡಿಸಿದೆ ; ಆಂಗ್ಲ ಮಾಧ್ಯಮದ ಶಿಕ್ಷಣ ಸಂಸ್ಥೆಗಳು ಯಾವ ಯಾವ ರೀತಿಯ ಶುಲ್ಕಗಳನ್ನು ಸಂಗ್ರಹಿಸಬಹುದು ; ಸದರಿ ಶುಲ್ಕಗಳ ಗರಿಷ್ಟ ಮಿತಿಯೇನು ;

(ಇ) ಖಾಸಗಿ ಶಿಕ್ಷಣ ಸಂಸ್ಥೆಗಳು ತಮ್ಮ ಶಿಕ್ಷಣ ಸಂಸ್ಥೆಯಲ್ಲಿ ವಿವಿಧ ರೀತಿಯ ಸೌಲಭ್ಯಗಳನ್ನು ನೀಡುವುದಾಗಿ ಸುಳ್ಳು ಜಾಹೀರಾತುಗಳನ್ನು ನೀಡಿ ಮಕ್ಕಳ ಪೋಷಕರನ್ನು ಆಕರ್ಷಿಸುವ ಪ್ರಯತ್ನ ಮಾಡುವ ಬಿಸಿನೆಸ್ ಸೆಂಟರ್‌ಗಳ ರೂಪದಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಅಂತಹ ಸಂಸ್ಥೆಗಳ ಮೇಲೆ ಮಾರಾಟ ತೆರಿಗೆ, ಆದಾಯ ತೆರಿಗೆ ಮುಂತಾದ ತೆರಿಗೆಗಳನ್ನು ವಿಧಿಸುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು ?